ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

**ರಾಮಯ್ಯ**

ಪಿ.ಆರ್. 1836 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪ-ವಿಭಾಗ-4, ಬೆಂಗಳೂರು.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ-ವಿಭಾಗ-4, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು 560029**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ : ಸಿಆರ್ 75/2005, ದಿನಾಂಕ: 28ನೇ ಅಕ್ಟೋಬರ್ 2005**

**ಅರ್ಜಿದಾರರು :** **ವಿರುದ್ಧ** **ಪ್ರತಿವಾದಿಗಳು :**

1) ಶ್ರೀ ಎಂ.ಜಿ. ರವಿಪ್ರಸಾದ್ ಬಿನ್
ಗಂಗಪ್ಪನಾಯ್ಡು, 21 ವರ್ಷ
2) ಗಂಗಮ್ಮ
ನಂ. 3, 3ನೇ ಕ್ರಾಸ್,
ಅಂಜನೇಯ ಸ್ವಾಮಿ ದೇವಸ್ಥಾನ ರಸ್ತೆ,
ಬೆನ್‌ಸನ್ ಟೌನ್, ಬೆಂಗಳೂರು 46.

1) ದಿ ನ್ಯೂ ಇಂಡಿಯಾ ಆಶ್ಯೂರೆನ್ಸ್ ಕಂ. ಲಿ.,
ನಂ. 41/2ಎ.2ಬಿ, 1ನೇ ಫ್ಲೋರ್, ನಿತ್ಯಾನಂದ ನಗರ,
ನಾಯಂಡಹಳ್ಳಿ, ಮೈಸೂರು ರಸ್ತೆ, ಬೆಂಗಳೂರು.
2) ಬಿ.ಎಸ್. ಮಂಜುನಾಥ್ s/o
ಎ. ನರಸಿಂಹ ಮೂರ್ತಿ, ಭೈರದೇನಹಳ್ಳಿ,
ದೇವನಹಳ್ಳಿ ತಾಲ್ಲೂಕು.

**ಪ್ರಕಟಣೆ**

ಅರ್ಜಿದಾರರಾದ ಶ್ರೀ ಎಂ.ಜಿ. ರವಿಪ್ರಸಾದ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಆನಂದ ಇವರು ಪ್ರತಿವಾದಿ - ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

**ರಾಮಯ್ಯ**

ಪಿ.ಆರ್. 1837 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪ-ವಿಭಾಗ-4, ಬೆಂಗಳೂರು.

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು 560 001**

**ಅಧಿಸೂಚನೆ ಸಂ: 270 / ಸಂ.ವಿ. / ಸಿ.ಒ.ಪಿ / 2005, ದಿನಾಂಕ: 27ನೇ ಅಕ್ಟೋಬರ್ 2005**

ಬೆಂಗಳೂರು ನಗರ ಮಹಾಲಕ್ಷ್ಮಿ ಲೇಔಟ್ 4ನೇ ಮುಖ್ಯ ರಸ್ತೆ (ಮಹಾಲಕ್ಷ್ಮಿ ವೀರಾಂಜನೇಯ ದೇವಸ್ಥಾನದ ಮುಂಭಾಗದ ರಸ್ತೆ) ಯು 26 ಅಡಿ ಅಗಲದ ರಸ್ತೆಯಾಗಿದ್ದು ಉತ್ತರ ದಕ್ಷಿಣವಾಗಿ ಹರಿದಿರುತ್ತದೆ. ಈ ರಸ್ತೆಯಲ್ಲಿ ಶನಿವಾರ ಮತ್ತು ಭಾನುವಾರುಗಳಂದು ವೀರಾಂಜನೇಯ ದೇವಸ್ಥಾನ ಮತ್ತು ಮಹಾಲಕ್ಷ್ಮಿ ದೇವಸ್ಥಾನಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಭಕ್ತಾಧಿಗಳು ಬರುತ್ತಿದ್ದು ಈ ರಸ್ತೆಯೂ ಕಿರಿದಾಗಿರುವುದರಿಂದ ಸಂಚಾರ ದಟ್ಟಣೆಯಿಂದ ಸಂಚಾರ ಆಗಾಗ್ಗೆ ಸ್ಥಗಿತವಾಗುತ್ತಿರುತ್ತದೆ. ಆದ್ದರಿಂದ ಈ ರಸ್ತೆಯಲ್ಲಿ ಸಂಚಾರ ಒತ್ತಡ ಕಡಿಮೆ ಮಾಡುವ ಸಲುವಾಗಿ ಈ ರಸ್ತೆಯನ್ನು 12ನೇ ಕ್ರಾಸ್ ರಸ್ತೆಯಿಂದ 11ನೇ ಕ್ರಾಸ್ ರಸ್ತೆವರೆಗೆ 400 ಅಡಿ ಉದ್ದ ಏಕ ಮುಖ ಸಂಚಾರ ಮಾಡಿ ಈ ರಸ್ತೆಯ ಪಶ್ಚಿಮ ಭಾಗದಲ್ಲಿ ಒಂದು ಬದಿಯಲ್ಲಿ ವಾಹನ ನಿಲುಗಡೆ ವ್ಯವಸ್ಥೆ ಮಾಡಬೇಕಾಗುತ್ತದೆ ಹಾಗೂ ಮಹಾಲಕ್ಷ್ಮಿ ಬಡಾವಣೆಯ ನಿವಾಸಿಗಳ ಬೇಡಿಕೆಯು ಇದಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರು ವಾಹನ ಕಾಯಿದೆ 1988 ಕಲಂ: 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ಬೆಂಗಳೂರು ನಗರ ಪೊಲೀಸ್ ಕಮೀಷನರ್, ಡಾ: ಅಜಯ್ ಕುಮಾರ್ ಸಿಂಗ್ ಆದ ನಾನು ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

1. ಮಹಾಲಕ್ಷ್ಮಿ ಲೇಔಟ್ 4ನೇ ಮುಖ್ಯ ರಸ್ತೆಯಲ್ಲಿ ದಕ್ಷಿಣದಿಂದ ಉತ್ತರದ ಕಡೆಗೆ ಅಂದರೆ 12ನೇ ಕ್ರಾಸ್ ಜಂಕ್ಷನ್‌ನಿಂದ 11ನೇ ಕ್ರಾಸ್ ಜಂಕ್ಷನ್‌ವರೆಗೆ ವಾಹನ ಸಂಚಾರಕ್ಕೆ ಅನುವು ಮಾಡಲಾಗಿದೆ.
2. ಮಹಾಲಕ್ಷ್ಮಿ ಲೇಔಟ್ 4ನೇ ಮೈನ್ ರಸ್ತೆಯಲ್ಲಿ 11ನೇ ಕ್ರಾಸ್ ಜಂಕ್ಷನ್‌ನಿಂದ 12ನೇ ಕ್ರಾಸ್ ಜಂಕ್ಷನ್‌ವರೆಗೆ ಉತ್ತರದಿಂದ ದಕ್ಷಿಣಕ್ಕೆ ಎಲ್ಲಾ ರೀತಿಯ ವಾಹನಗಳ ಪ್ರವೇಶವನ್ನು ನಿಷೇಧಿಸಲಾಗಿದೆ.
3. ಮಹಾಲಕ್ಷ್ಮಿ ಲೇಔಟ್ 4ನೇ ಮೈನ್ ರಸ್ತೆಯಲ್ಲಿ 12ನೇ ಕ್ರಾಸ್ ಜಂಕ್ಷನ್‌ನಿಂದ 11ನೇ ಕ್ರಾಸ್ ಜಂಕ್ಷನ್‌ವರೆಗೆ ಈ ರಸ್ತೆಯ ಪಶ್ಚಿಮದ ಭಾಗದಲ್ಲಿ ವಾಹನ ನಿಲುಗಡೆ ವ್ಯವಸ್ಥೆ ಮಾಡಲಾಗಿದೆ. ಅಂತೆಯೇ ಈ ರಸ್ತೆಯ ಪೂರ್ವದ ಕಡೆ 12ನೇ ಕ್ರಾಸ್ ರಸ್ತೆ ಜಂಕ್ಷನ್‌ನಿಂದ 11ನೇ ಕ್ರಾಸ್ ಜಂಕ್ಷನ್‌ವರೆಗೆ ನಿಲುಗಡೆ ನಿಷೇಧ ಮಾಡಲಾಗಿದೆ.

ಅಂತೆಯೇ 1988 ಮೋಟಾರು ವಾಹನ ಕಾಯ್ದೆ ಕಲಂ 116 ಹಾಗೂ 1960ನೇ ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ ಕಲಂ 4ರಲ್ಲಿ ನನಗೆ ಪ್ರದತ್ತವಾದ ಅಧಿಕಾರ ಚಲಾಯಿಸಿ ಈ ನಿರ್ಬಂಧನೆಗಳನ್ನು ಜಾರಿಗೊಳಿಸಲು ಹಾಗೂ ಅವಶ್ಯಕವಾದ ಸೂಚನಾ ಫಲಕಗಳನ್ನು ಹಾಕಲು ಸಹ ಆದೇಶ ನೀಡಿರುತ್ತೇನೆ.

ಈ ಆದೇಶವು ಈ ದಿನ ಅಂದರೆ ದಿನಾಂಕ 27.10.2005 ರಿಂದ ಚಾಲ್ತಿಯಲ್ಲಿರುತ್ತದೆ ನನ್ನ ಸಹಿ ಹಾಗೂ ಮುದ್ರೆಯೊಂದಿಗೆ ಈ ಆದೇಶವನ್ನು ನೀಡಿರುತ್ತೇನೆ.

**ಡಾ: ಅಜಯ್ ಕುಮಾರ್ ಸಿಂಗ್**

ಪಿ.ಆರ್. 1847 ಕಮೀಷನರ್ ಆಫ್ ಪೊಲೀಸ್, ಬೆಂಗಳೂರು ನಗರ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ**

**ನಂ: ಡಿಆರ್ : ಡಿವಿಜಿ : ಎಲ್‌ಕ್ಯೂಡಿ : ಸಿಆರ್- 23 : 2005-06, ದಿನಾಂಕ: 15ನೇ ಡಿಸೆಂಬರ್ 2005.**

**ವಿಷಯ:** ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಬಾಗಳಿ ಹರಪನಹಳ್ಳಿ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರ ಪ್ರಸ್ತಾವನೆ ದಿನಾಂಕ: 5.11.05 ಮತ್ತು ದಿನಾಂಕ: 03.12.05.

2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ಪತ್ರ ದಿನಾಂಕ: 11.11.05.

**ಪ್ರಸ್ತಾವನೆ :**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ನೋಟೀಸು ನೀಡಿದ್ದು, ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 69 : ಸಿಎಲ್ಎಂ : 2001, ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಕೆ.ಎಂ. ಆಶಾ, ಕೆ.ಸಿ.ಎಸ್ ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಹಾಲು ಉತ್ಪಾದಕರ ಸಹಕಾರ ಸಂಘ ನಿ. ಬಾಗಳಿ ಹರಪನಹಳ್ಳಿ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ ಹರಪನಹಳ್ಳಿ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 15.12.2005 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಪಿ.ಆರ್. 2047

ಸಹಕಾರ ಸಂಘಗಳ ಉಪ ನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ**

**ನಂ: ಡಿಆರ್ : ಡಿವಿಜಿ : ಎಲ್‌ಕ್ಯೂಡಿ : ಸಿಆರ್- 24 : 2005-06, ದಿನಾಂಕ: 15ನೇ ಡಿಸೆಂಬರ್ 2005.**

**ವಿಷಯ:** ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಗತೂರು ಚನ್ನಗಿರಿ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಗಿರಿ ಇವರ ಪ್ರಸ್ತಾವನೆ ದಿನಾಂಕ: 7.11.05 ಮತ್ತು ಪತ್ರ ದಿನಾಂಕ: 6.12.05.
2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ಪತ್ರ ದಿನಾಂಕ: 11.11.05.

**ಪ್ರಸ್ತಾವನೆ :**

ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಗಿರಿ ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ನೋಟೀಸು ನೀಡಿದ್ದು, ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 69 : ಸಿಎಲ್ಎಂ : 2001, ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಕೆ.ಎಂ. ಆಶಾ, ಕೆ.ಸಿ.ಎಸ್ ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಹಾಲು ಉತ್ಪಾದಕರ ಸಹಕಾರ ಸಂಘ ನಿ. ಕಗತೂರು ಚನ್ನಗಿರಿ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ ಚನ್ನಗಿರಿ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 15.12.2005 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಪಿ.ಆರ್. 2048

ಸಹಕಾರ ಸಂಘಗಳ ಉಪ ನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ**

**ನಂ: ಡಿಆರ್ : ಡಿವಿಜಿ : ಎಲ್‌ಕ್ಯೂಡಿ : ಸಿಆರ್- 28 : 2005-06, ದಿನಾಂಕ: 15ನೇ ಡಿಸೆಂಬರ್ 2005.**

**ವಿಷಯ:** ಸ್ಥಗಿತಗೊಂಡಿರುವ ಜನತಾ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ., ಕೊರಟಕೆರೆ ಚನ್ನಗಿರಿ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಗಿರಿ ಇವರ ಪ್ರಸ್ತಾವನೆ ದಿನಾಂಕ: 29.11.05.

**ಪ್ರಸ್ತಾವನೆ :**

ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಗಿರಿ ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 69 : ಸಿಎಲ್ಎಂ : 2001, ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಕೆ.ಎಂ. ಆಶಾ, ಕೆ.ಸಿ.ಎಸ್ ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಜನತಾ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ. ಕೊರಟಕೆರೆ ಚನ್ನಗಿರಿ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ ಚನ್ನಗಿರಿ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 15.12.2005 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಪಿ.ಆರ್. 2049 ಸಹಕಾರ ಸಂಘಗಳ ಉಪ ನಿಬಂಧಕರು,

ದಾವಣಗೆರೆ ಜಿಲ್ಲೆ, ದಾವಣಗೆರೆ.

**ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು ಇವರ ನಡವಳಿಗಳು**

**ವಿಷಯ:** ಸಮಾಪನೆಯಲ್ಲಿರುವ ಧಾರವಾಡ ಜಿಲ್ಲಾ ಲೇಬರ್ ಸಹಕಾರ ಯೂನಿಯನ್ ನಿ. ದಾಸ್ತಿಕೊಪ್ಪ ತಾ: ಕಲಘಟಗಿ ಇದರ ನೋಂದಣಿ ಕ್ರಮಾಂಕ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಾಪನಾದೇಶ ಸಂ: ಸಮಾಪನೆ / 117 / 98-99, ದಿನಾಂಕ: 16.12.1998.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು ಧಾರವಾಡ ಇವರ ನೋಂದಣಿ ರದ್ಧತಿ ಪ್ರಸ್ತಾವೆ ಸಂ: ಸನಿ-15 / ಸಮಾಪನೆ/ ನೋಂದಣಿ ರದ್ಧತಿ / 2001-02, ದಿನಾಂಕ: 16.3.2002

3) ಸಮಾಪನಾಧಿಕಾರಿಗಳು ಇವರ ಅಂತಿಮ ಸಭೆ ನಡವಳಿಗಳು ದಿನಾಂಕ: 25.1.2002.

4) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಧಾರವಾಡ ಇವರ ಪತ್ರ ಸಂ:ಎಆರ್-15 / ಸಮಾಪನೆ / ನೊ: ರದ್ದು / 2001-02, ದಿ: 29.9.2005.

**ಪೀಠಿಕೆ :**

ಧಾರವಾಡ ಜಿಲ್ಲಾ ಲೇಬರ್ ಸಹಕಾರ ಯೂನಿಯನ್ ನಿ, ದಾಸ್ತಿಕೊಪ್ಪ ತಾಲ್ಲೂಕು ಕಲಘಟಗಿ ಈ ಸಂಘ ಕ್ರ.ಸಂ. 60162 ದಿನಾಂಕ: 30.1.1967 ರನ್ವಯ ನೊಂದಾಯಿಸಲ್ಪಟ್ಟಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ಧಾರವಾಡ ಜಿಲ್ಲೆಗೆ ಸೀಮಿತವಾಗಿರುತ್ತದೆ. ಸಂಘವು ನೋಂದಣಿ ಯಾದಾಗಿನಿಂದಲೂ ಉದ್ದೇಶದ ರೀತ್ಯಾ ಕಾರ್ಯನಿರ್ವಹಿಸದೆ ಸ್ಥಗಿತಗೊಂಡಿರುತ್ತದೆ. ಸಂಘದಲ್ಲಿ ವಾರ್ಷಿಕ ಮಹಾಸಭೆಗಳು ಜರುಗಿರುವುದಿಲ್ಲ. ಹಾಗೂ ಆಡಳಿತ ಮಂಡಳಿ ಸಮಿತಿ ರಚಿತವಾಗಿರುವುದಿಲ್ಲ. ಸಂಘದ ಆಡಿಟ್ ವರ್ಗೀಕರಣವು 'ಡಿ' ಯಲ್ಲಿ ವರ್ಗೀಕರಿಸಲಾಗಿದೆ. ಸಂಘಕ್ಕೆ ಬರತಕ್ಕ ರಕಂ ಹಾಗೂ ಕೊಡತಕ್ಕ ರಕಂಗಳ ವಸೂಲಾತಿ ಮಾಡುವುದಾಗಲೀ, ಮರುಪಾವತಿಸುವುದಕ್ಕಾಗಲೀ ಸಂಘದವರು ವಿಫಲಗೊಂಡಿದ್ದರಿಂದ ಸಂಘವನ್ನು ಉಲ್ಲೇಖ (1) ರೀತ್ಯಾ ಸಮಾಪನೆಗೊಳಿಸಲಾಗಿತ್ತು. ಹಾಗೂ ಭೂ ಅಡಮಾನ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ಧಾರವಾಡ ಇವರನ್ನು ಸಮಾಪನಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು.

ಉಲ್ಲೇಖ (2) ರಂತೆ ಸಮಾಪನಾಧಿಕಾರಿಗಳು ಪ್ರಭಾರ ವಹಿಸಿಕೊಂಡು ಲಭ್ಯವಿರುವ ಸಂಘದ ದಾಖಲಾತಿಗಳನ್ವಯ ಸಂಘದ ಸದಸ್ಯರಿಗೆ ಸಂಘವನ್ನು ಪುನಶ್ಚೇತನಗೊಳಿಸುವ ಅಭಿಲಾಷೆ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಹಾಗೂ ಸಂಘಕ್ಕೆ ಯಾವುದೇ ಆಸ್ತಿ ವಗೈರೆ ಇಲ್ಲವಾದ್ದರಿಂದ ದಾಖಲಾತಿಗಳು ಏನೂ ಲಭ್ಯವಿರುವುದಿಲ್ಲವಾದ್ದರಿಂದ ಆದ್ಯತಾ ಪಟ್ಟಿ ತಯಾರಿಸುವ ಅವಶ್ಯಕತೆ ಇಲ್ಲವೆಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಧಾರವಾಡ ಇವರು ಅಭಿಪ್ರಾಯಪಟ್ಟಿರುತ್ತಾರೆ. ಈ ಸಹಕಾರ ಸಂಘವನ್ನು ಸಮಾಪನೆಯಲ್ಲೆ ಉಳಿಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನವಿರುವುದಿಲ್ಲ. ಆದ್ದರಿಂದ ಸಂಘದ ನೋಂದಣಿಯನ್ನು ರದ್ದುಪಡಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಪರಿಗಣಿಸಿ ಸಂಘವನ್ನು ಯಥಾಸ್ಥಿತಿಯಲ್ಲಿ ಮುಂದುವರೆಸುವುದರಿಂದ ಸಾರ್ವಜನಿಕರಿಗಾಗಲೀ ಅಥವಾ ಸದಸ್ಯರಿಗಾಗಲೀ ಯಾವುದೇ ಪ್ರಯೋಜನಕಾರಿಯಾಗಿಲ್ಲವೆಂದು ಮನಗಂಡು ಸದರಿ ಸಮಾಪನಾ ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸಮಂಜಸವೆಂದು ಪರಿಭಾವಿಸಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಸಮಾಪನೆ / 117 / 1998-99, ದಿನಾಂಕ: 16ನೇ ಡಿಸೆಂಬರ್ 2005**

ಪೀಠಿಕೆಯಲ್ಲಿ ಪ್ರತಿವಾದಿಸಲಾದ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು, ಬಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75 ರಡಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಧಾರವಾಡ ಜಿಲ್ಲಾ ಲೇಬರ್ ಸಹಕಾರ ಯೂನಿಯನ್ ನಿ, ದಾಸ್ತಿಕೊಪ್ಪ, ತಾಲ್ಲೂಕು ಕಲಘಟಗಿ ಇದರ ನೋಂದಣಿ ಸಂ. 60162 ನ್ನು ರದ್ದುಪಡಿಸಿರುತ್ತೇನೆ. ಈ ನೋಂದಣಿ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ನಿಂತುಹೋಗಿರುತ್ತದೆಂದು, ಸಂಘವು ಅಸ್ತಿತ್ವದಲ್ಲಿಲ್ಲದೆ ವಿಸರ್ಜಿತವಾಗಿದೆಯೆಂದು ಪರಿಗಣಿಸತಕ್ಕದ್ದು.

ಈ ಆದೇಶವು ನನ್ನ ಹಸ್ತಾಕ್ಷರ ಹಾಗೂ ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 16.12.2005 ರಂದು ಹೊರಡಿಸಲಾಗಿದೆ.

ಪಿ.ಆರ್. 2050 **ಬಿ. ನಾಗರಾಜ**

ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ)

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು**

**ವಿಷಯ:** ರಾಯಚೂರು ಜಿಲ್ಲೆ, ದೇವದುರ್ಗ ತಾಲ್ಲೂಕು, ಗಬ್ಬೂರು ಗ್ರಾಮದಲ್ಲಿ ಗ್ರೆ ಗ್ರಾನೈಟ್‌ಗಾಗಿ ಶ್ರೀ ತಿಮ್ಮನಗೌಡ ಪಾಟೀಲ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 570 ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ:** 1) ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು 570:2004-05, 4848 ದಿನಾಂಕ: 4.12.2004.

2) ಹಿರಿಯ ಭೂವಿಜ್ಞಾನಿ, ಕೊಪ್ಪಳ ರವರ ಪತ್ರ ಸಂಖ್ಯೆ:ಹಿಭೂವಿ:ಕೊಖವಿ ಗಭೂಇ:ಡಿಸಿಬಿ:ಕಗಗು570:2005-06:591 ದಿನಾಂಕ: 20.5.2005

**ಪ್ರಸ್ತಾವನೆ :**

ರಾಯಚೂರು ಜಿಲ್ಲೆ, ದೇವದುರ್ಗ ತಾಲ್ಲೂಕು, ಗಬ್ಬೂರು ಗ್ರಾಮದ ಸರ್ವೆ ನಂ. 780 ರಲ್ಲಿ ಶ್ರೀ ತಿಮ್ಮನಗೌಡ ಪಾಟೀಲ್ ರವರಿಗೆ 2-20 ಎಕರೆಗೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 570 ಇದ್ದು ಸದರಿ ಗುತ್ತಿಗೆಯು ದಿನಾಂಕ: 21.01.2003 ರಿಂದ 5 ವರ್ಷಗಳಿಗಾಗಿ ಮಂಜೂರು ಮಾಡಲಾಗಿತ್ತು.

ಉಲ್ಲೇಖಿತ ಪತ್ರ 2 ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ, 2005 ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ. 1,13,657/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿದ್ದು, ಗುತ್ತಿಗೆಯ ಮೇಲಿನ ಸ್ಥಿರ ತೆರಿಗೆ ಬಾಕಿ ಪಾವತಿಸದೆ ಇರುವ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂ ಆರ್ ಸಿ 92 ದಿನಾಂಕ 2.7.1994 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ ಸಂಖ್ಯೆ: ಗಭೂಇ : ಡಿಸಿಬಿ:ಕಗಗು:570:2005-06 / 11354, ದಿನಾಂಕ: 19ನೇ ಡಿಸೆಂಬರ್ 2005**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ರಾಯಚೂರು ಜಿಲ್ಲೆ, ದೇವದುರ್ಗ ತಾಲ್ಲೂಕು, ಗಬ್ಬೂರು ಗ್ರಾಮದ ಸರ್ವೆ ನಂ. 780 ರಲ್ಲಿ 2-20 ಎಕರೆಗೆ ಗ್ರೇ ಗ್ರಾನೈಟ್‌ಗಾಗಿ ಶ್ರೀ ತಿಮ್ಮನಗೌಡ ಪಾಟೀಲ್ ರವರ ಹೆಸರಿನಲ್ಲಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 570 ನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ಪಿ.ಆರ್. 2051

ನಿರ್ದೇಶಕರು,
ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು**

**ವಿಷಯ:** ಕೊಪ್ಪಳ ಜಿಲ್ಲೆ, ಯಲಬುರ್ಗಾ ತಾಲ್ಲೂಕು, ಕುಕ್ಕನೂರು ಗ್ರಾಮದಲ್ಲಿ ಗ್ರೆ ಗ್ರಾನೈಟ್‌ಗಾಗಿ ಮೆ: ಓರಿಯಂಟಲ್ ಸೆಲೆಕ್ಟ್ ಗ್ರಾನೈಟ್ಸ್ ಪ್ರೈ. ಲಿ., ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 217 ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ:** 1) ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು 217:2004-05, 4711 ದಿನಾಂಕ: 29.11.2004.

2) ಹಿರಿಯ ಭೂವಿಜ್ಞಾನಿ, ಕೊಪ್ಪಳ ರವರ ಪತ್ರ ಸಂಖ್ಯೆ:ಹಿಭೂವಿ:ಕೊಖವಿ ಗಭೂಇ:ಡಿಸಿಬಿ:ಕಗಗು217:2005-06:917 ದಿನಾಂಕ: 2.6.2005.

**ಪ್ರಸ್ತಾವನೆ :**

ಕೊಪ್ಪಳ ಜಿಲ್ಲೆ, ಯಲಬುರ್ಗಾ ತಾಲ್ಲೂಕು, ಕುಕ್ಕನೂರು ಗ್ರಾಮದ ಸರ್ವೆ ನಂ. 154/A ರಲ್ಲಿ ಮೆ: ಓರಿಯೆಂಟಲ್ ಸೆಲೆಕ್ಟ್ ಗ್ರಾನೈಟ್ಸ್ ಪ್ರೈ. ಲಿ., ರವರಿಗೆ 3-00 ಎಕರೆಗೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 217 ಇದ್ದು ಸದರಿ ಗುತ್ತಿಗೆಯು ದಿನಾಂಕ: 13.10.1998 ರಿಂದ 10 ವರ್ಷಗಳಿಗಾಗಿ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ 2 ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ, 2004 ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ. 1,84,835/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿದ್ದು, ಗುತ್ತಿಗೆಯ ಮೇಲಿನ ಸ್ಥಿರ ತೆರಿಗೆ ಬಾಕಿ ಪಾವತಿಸದೆ ಇರುವ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂ ಆರ್ ಸಿ 92 ದಿನಾಂಕ 2.7.1994 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ ಸಂಖ್ಯೆ: ಗಭೂಇ : ಡಿಸಿಬಿ:ಕಗಗು:217:2005-06 / 11363, ದಿನಾಂಕ: 19ನೇ ಡಿಸೆಂಬರ್ 2005**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಕೊಪ್ಪಳ ಜಿಲ್ಲೆ, ಯಲಬುರ್ಗಾ ತಾಲ್ಲೂಕು, ಕುಕ್ಕನೂರು ಗ್ರಾಮದ ಸರ್ವೆ ನಂ. 154/A ರಲ್ಲಿ 3-00 ಎಕರೆಗೆ ಗ್ರೇ ಗ್ರಾನೈಟ್‌ಗಾಗಿ ಮೆ: ಓರಿಯೆಂಟಲ್ ಸೆಲೆಕ್ಟ್ ಗ್ರಾನೈಟ್ಸ್ ಪ್ರೈ. ಲಿ. ರವರ ಹೆಸರಿನಲ್ಲಿನ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 217 ನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ಪಿ.ಆರ್. 2052

ನಿರ್ದೇಶಕರು,
ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು**

**ವಿಷಯ:** ಕೊಪ್ಪಳ ಜಿಲ್ಲೆ, ಯಲಬುರ್ಗಾ ತಾಲ್ಲೂಕು, ಚನ್ನಪ್ಪನಹಳ್ಳಿ ಗ್ರಾಮದಲ್ಲಿ ಗ್ರೇ ಗ್ರಾನೈಟ್‌ಗಾಗಿ ಶ್ರೀ ಪ್ರಕಾಶ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 193 ರ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸುವ ಬಗ್ಗೆ.

**ಉಲ್ಲೇಖ:** 1) ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು 193:2003-04, 19092 ದಿನಾಂಕ: 05.03.2004.

2) ಹಿರಿಯ ಭೂವಿಜ್ಞಾನಿ, ಕೊಪ್ಪಳ ರವರ ಪತ್ರ ಸಂಖ್ಯೆ: ಕೊಖವಿ : ಗಭೂಇ: ಡಿಸಿಬಿ : ಕಗಗು : 193 : 2005-06 : 863 ದಿನಾಂಕ: 31.5.2005.

**ಪ್ರಸ್ತಾವನೆ :**

ಕೊಪ್ಪಳ ಜಿಲ್ಲೆ, ಯಲಬುರ್ಗಾ ತಾಲ್ಲೂಕು, ಚನ್ನಪ್ಪನಹಳ್ಳಿ ಗ್ರಾಮದ ಸರ್ವೆ ನಂ. 60/B (60/1) ರಲ್ಲಿ ಶ್ರೀ ಪ್ರಕಾಶ್ ರವರಿಗೆ 2-00 ಎಕರೆಗೆ ದಿನಾಂಕ: 22.6.1998 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ (2) ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ, 2005 ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ. 1,23,089/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂ ಆರ್ ಸಿ 92 ದಿನಾಂಕ 2.7.1994 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ ಸಂಖ್ಯೆ: ಗಭೂಇ : ಡಿಸಿಬಿ:ಕಗಗು:193:2005 - 06 / 11372, ದಿನಾಂಕ: 19ನೇ ಡಿಸೆಂಬರ್ 2005**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಕೊಪ್ಪಳ ಜಿಲ್ಲೆ, ಯಲಬುರ್ಗಾ ತಾಲ್ಲೂಕು, ಚನ್ನಪ್ಪನಹಳ್ಳಿ ಗ್ರಾಮದ ಸರ್ವೆ ನಂ. 60/B (60/1) ರಲ್ಲಿ 2-00 ಎಕರೆಗೆ ಗ್ರೇ ಗ್ರ್ಯಾನೈಟ್ ಶಿಲೆಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 193 ರ ಗುತ್ತಿಗೆ ನಿಷ್ಕ್ರಿಯವಾಗಿಟ್ಟಿರುವ ಕಾರಣ ಗುತ್ತಿಗೆಯನ್ನು ನಿಯಮದಂತೆ ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಲಾಗಿದೆ.

ಪಿ.ಆರ್. 2053

ನಿರ್ದೇಶಕರು,
ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು

**ಜಲಸಂಪನ್ಮೂಲ ಇಲಾಖೆ**

**ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005 (ಭಾರತ ಸರ್ಕಾರ)**

**ಸಣ್ಣ ನೀರಾವರಿ (ಉತ್ತರ) ವಲಯ ಬಿಜಾಪೂರ.**

**ಸಂ:ಮುಇಂ:ಸನೀ(ಉ)ವ:ಬಿಜೆಪಿ:ಸಿ-1:2005-06/6002, ದಿನಾಂಕ: 12ನೇ ಡಿಸೆಂಬರ್ 2005**

**ಕೈಪಿಡಿ 1 – ಸಂಸ್ಥೆಯ ವಿವರಗಳು ಮತ್ತು ಕರ್ತವ್ಯ ಮತ್ತು ವಿಧಿಗಳು**

**ಕರ್ನಾಟಕದ ಒಟ್ಟು ವಿಸ್ತೀರ್ಣ 19.18 ಮಿಲಿಯನ್ ಹೆಕ್ಟೇರು, ಇದರಲ್ಲಿ 12.31 ಮಿಲಿಯನ್ ಹೆಕ್ಟೇರ್‌ಗಳಲ್ಲಿ ಜಮೀನಿನಲ್ಲಿ ಬೆಳೆ ಬೆಳೆಯಲಾಗುತ್ತಿದೆ. ಮೇಲಿನ ಪೈಕಿ ಸಣ್ಣ ನೀರಾವರಿ (ಉತ್ತರ) ವಲಯ ಬಿಜಾಪೂರ ಇದರಲ್ಲಿನ ಒಟ್ಟು ವಿಸ್ತೀರ್ಣವು 9.32 ಮಿಲಿಯನ್ ಹೆಕ್ಟೇರ್ ಆಗಿದ್ದು, ಅದರಲ್ಲಿ 5.00 ಮಿಲಿಯನ್ ಹೆಕ್ಟೇರ್‌ಗಳಲ್ಲಿ ಬೆಳೆ ಬೆಳೆಯಲಾಗುತ್ತಿದೆ. ಕರಾವಳಿ ತೀರ ಮತ್ತು ಮಲೆನಾಡು ಪ್ರದೇಶವನ್ನು ಹೊರತು ಪಡಿಸಿ ಉಳಿದ ಕಡೆಗಳಲ್ಲಿ ಸಕಾಲದಲ್ಲಿ ಮಳೆ ಬಾರದೆ ಆ ಪ್ರದೇಶವು ಆಗಾಗ ಬರಗಾಲಕ್ಕೆ ತುತ್ತಾಗುತ್ತದೆ.**

ರಾಜ್ಯದಲ್ಲಿ ಅಂದಾಜಿನ ಪ್ರಕಾರ ಎಲ್ಲಾ ಮೂಲಗಳಿಂದ ನೀರಾವರಿ ಆಗುವ ಪ್ರದೇಶ ವಿಸ್ತೀರ್ಣವು 55.00 ಲಕ್ಷ ಹೆಕ್ಟೇರ್ ಆಗಿರುತ್ತದೆ. ಈ ಪೈಕಿ 10.00 ಲಕ್ಷ ಹೆಕ್ಟೇರ್ ಜಮೀನಿಗೆ ಸಣ್ಣ ನೀರಾವರಿ ಯೋಜನೆಗಳ ಮೂಲಕ ನೀರಾವರಿ ಸೌಲಭ್ಯ ಕಲ್ಪಿಸಬಹುದಾಗಿದೆ ಎಂದು ಅಂದಾಜಿಸಲಾಗಿದೆ. ರಾಜ್ಯದಲ್ಲಿನ 40 ಹೆಕ್ಟೇರ್‌ನಿಂದ 2000 ಹೆಕ್ಟೇರ್‌ಗಳವರೆಗೆ ಅಚ್ಚುಕಟ್ಟು ಇರುವ ಎಲ್ಲಾ ನೀರಾವರಿ ಯೋಜನೆಗಳನ್ನು ಸಣ್ಣ ನೀರಾವರಿ ಯೋಜನೆಗಳೆಂದು ಪರಿಗಣಿಸಲಾಗಿದೆ. ಇದರಲ್ಲಿ ಕೆರೆಗಳು, ಪಿಕಪ್‌ಗಳು, ಬಂದಾರಗಳು ಕಿಂಡಿ ಅಣೆಕಟ್ಟುಗಳು ಬ್ಯಾರೇಜುಗಳು ಮತ್ತು ಏತ ನೀರಾವರಿ ಯೋಜನೆಗಳು ಸೇರಿಕೊಂಡಿವೆ. ಇದಲ್ಲದೆ ಸಣ್ಣ ನೀರಾವರಿ ಇಲಾಖೆಯ ಅಡಿಯಲ್ಲಿ ನದಿದಂಡೆ ಕೊರೆತಕ್ಕೆ ಸಂರಕ್ಷಣೆ ಕಾಮಗಾರಿಯು ಸೇರಿದೆ. ಸಣ್ಣ ನೀರಾವರಿ ಕಾಮಗಾರಿಗಳು ರಾಜ್ಯಾದ್ಯಂತ ವ್ಯಾಪಕವಾಗಿ ಹರಡಿಕೊಂಡಿವೆ. ಸಣ್ಣ ನೀರಾವರಿ ಯೋಜನೆಗಳನ್ನು ಶೀಘ್ರ ಅನುಷ್ಠಾನಗೊಳಿಸಿ ತ್ವರಿತವಾಗಿ ಕೃಷಿಗೆ ನೀರು ಒದಗಿಸಬಹುದಾದ್ದರಿಂದ ಇದು ಪ್ರಾಮುಖ್ಯತೆ ಹೊಂದಿರುತ್ತದೆ. ಸಣ್ಣ ನೀರಾವರಿ (ಉತ್ತರ) ವಲಯದ ವ್ಯಾಪ್ತಿಯಲ್ಲಿ 2004ನೇ ಏಪ್ರಿಲ್ 1ರಲ್ಲಿ ಒಟ್ಟು 2656 ಸಣ್ಣ ನೀರಾವರಿ ಯೋಜನೆಗಳು ಅಸ್ತಿತ್ವದಲ್ಲಿದ್ದು, ಇವುಗಳಿಂದ 2,94,791 ಹೆಕ್ಟೇರ್ ಭೂಮಿಗೆ ನೀರಾವರಿ ಸೌಲಭ್ಯ ಕಲ್ಪಿಸಲಾಗಿದೆ.

ಇದಲ್ಲದೆ ಈ ವಲಯದ ವ್ಯಾಪ್ತಿಯಲ್ಲಿ 2 ಮಧ್ಯಮ ನೀರಾವರಿ ಕಾಮಗಾರಿಗಳ ಉಸ್ತುವಾರಿ ಮತ್ತು ನಿರ್ವಹಣೆಯನ್ನು ಸಹ ನೋಡಿಕೊಳ್ಳುತ್ತದೆ. ಈ ಮಧ್ಯಮ ನೀರಾವರಿ ಯೋಜನೆಗಳಿಂದ ಒಟ್ಟಾರೆ 3,244 ಹೆಕ್ಟೇರ್‌ಗಳಷ್ಟು ಅಚ್ಚುಕಟ್ಟು ನೀರಾವರಿಗೆ ಒಳಪಟ್ಟಿದೆ.

ಸಣ್ಣ ನೀರಾವರಿ (ಉತ್ತರ) ವಲಯುವು ಸರ್ಕಾರದ ಕಾರ್ಯದರ್ಶಿಗಳು ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಇವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಿದೆ. ಈ ವಲಯದಡಿಯಲ್ಲಿ 2 ವೃತ್ತ ಕಛೇರಿಗಳಿದ್ದು ಪ್ರತಿ ವೃತ್ತದಲ್ಲಿ ಒಬ್ಬರು ಅಧೀಕ್ಷಕ ಅಭಿಯಂತರರು ಕೆಲಸ ನಿರ್ವಹಿಸುತ್ತಿದ್ದು, ಅವರ ಕಛೇರಿಗಳು ಬೆಳಗಾವಿ ಮತ್ತು ಗುಲ್ಬರ್ಗಾದಲ್ಲಿರುತ್ತವೆ.

ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಅಭಿಯಂತರರ ಅಧೀನದಲ್ಲಿ 8 ಸಣ್ಣ ನೀರಾವರಿ ವಿಭಾಗಗಳು ಮತ್ತು 31 ಸಣ್ಣ ನೀರಾವರಿ ಉಪವಿಭಾಗಗಳು ಇರುತ್ತವೆ. ಈ ವಲಯದಲ್ಲಿ ಸಣ್ಣ ನೀರಾವರಿ ಕಾಮಗಾರಿಗಳ ಗುಣ ನಿಯಂತ್ರಣ ಉಸ್ತುವಾರಿಯನ್ನು ನಿರ್ವಹಿಸಲು ಒಂದು ಗುಣ ನಿಯಂತ್ರಣ ವಿಭಾಗ ಧಾರವಾಡದಲ್ಲಿ ಕಾರ್ಯನಿರ್ವಹಿಸುತ್ತಿವೆ. ಈ ಗುಣ ನಿಯಂತ್ರಣ ವಿಭಾಗದ ಅಡಿಯಲ್ಲಿ ನಾಲ್ಕು ಸಣ್ಣ ನೀರಾವರಿ ಗುಣ ನಿಯಂತ್ರಣ ಉಪ ವಿಭಾಗಗಳು ಕ್ರಮವಾಗಿ ಧಾರವಾಡ, ಬೆಳಗಾವಿ, ಬಳ್ಳಾರಿ, ಗುಲಬರ್ಗಾ ಕೆಲಸ ನಿರ್ವಹಿಸುತ್ತವೆ.

ಸಣ್ಣ ನೀರಾವರಿ ಉತ್ತರ ವಲಯವು ಈ ಕೆಳಕಂಡ ಜಿಲ್ಲೆಗಳಲ್ಲಿ ಸಣ್ಣ ನೀರಾವರಿ ಕಾಮಗಾರಿಗಳ ನಿರ್ಮಾಣ, ಉಸ್ತುವಾರಿ, ಹಾಗೂ ನಿರ್ವಹಣೆಯನ್ನು ನೋಡಿಕೊಳ್ಳುತ್ತದೆ.

| ಸಣ್ಣ ನೀರಾವರಿ ಉತ್ತರ ವಲಯ ಬಿಜಾಪೂರ | | |
|---|---|---|
| ಕ್ರ.ಸಂ | ಸಣ್ಣ ನೀರಾವರಿ ವಿಭಾಗಗಳು | ವಿಭಾಗ ಕಾರ್ಯವ್ಯಾಪ್ತಿಯಲ್ಲಿ ಬರುವ ಜಿಲ್ಲೆಗಳು |
| 1 | ಬೆಳಗಾವಿ | ಬೆಳಗಾವಿ |
| 2 | ಧಾರವಾಡ | ಧಾರವಾಡ, ಹಾವೇರಿ, ಗದಗ |
| 3 | ಹಳಿಯಾಳ | ಉತ್ತರಕನ್ನಡ |
| 4 | ಬಿಜಾಪೂರ | ಬಿಜಾಪೂರ, ಬಾಗಲಕೋಟ |
| 5 | ಗುಲಬರ್ಗಾ | ಗುಲಬರ್ಗಾ |
| 6 | ಬೀದರ | ಬೀದರ |
| 7 | ಬಳ್ಳಾರಿ | ಬಳ್ಳಾರಿ |
| 8 | ಕುಷ್ಟಗಿ | ರಾಯಚೂರು, ಕೊಪ್ಪಳ. |

ಸಣ್ಣ ನೀರಾವರಿ (ಉತ್ತರ) ವಲಯ ಬಿಜಾಪೂರ ಇವರ ಅಡಿಯಲ್ಲಿನ ವಿಭಾಗದಲ್ಲಿ 31 ಉಪ ವಿಭಾಗಗಳಿದ್ದು ಅವುಗಳ ಕಾರ್ಯ ಕ್ಷೇತ್ರದ ವಿವರ ಈ ಕೆಳಗಿನಂತೆ ಇದೆ.

| ವೃತ್ತ / ವಿಭಾಗ | ಉಪವಿಭಾಗ | ವ್ಯಾಪ್ತಿಯಲ್ಲಿರುವ ತಾಲ್ಲೂಕು |
|---|---|---|
| ಅ. ಬೆಳಗಾವಿ ವೃತ್ತ | | |
| 1. ಬೆಳಗಾವಿ | 1. ಬೆಳಗಾವಿ | ಬೆಳಗಾವಿ, ಹುಕ್ಕೇರಿ, ಖಾನಾಪೂರ ಬೈಲಹೊಂಗಲ |
| | 2. ಗೋಕಾಕ | ಗೋಕಾಕ, ರಾಮದುರ್ಗ, ಸವದತ್ತಿ |
| | 3. ಅಥಣಿ | ಅಥಣಿ, ಚಿಕ್ಕೋಡಿ, ರಾಯಬಾಗ. |

| | | |
|---|---|---|
| 2. ಧಾರವಾಡ | 1. ಧಾರವಾಡ | ಧಾರವಾಡ, ಹುಬ್ಬಳ್ಳಿ, ಕಲಘಟಗಿ, ನವಲಗುಂದ. |
| | 2. ಹಾನಗಲ್ | ಹಾನಗಲ್, ಹಿರೇಕೆರೂರ, ಶಿಗ್ಗಾವಿ, ಸವಣೂರ,, ಕುಂದಗೋಳ. |
| | 3. ರಾಣಿಬೆನ್ನೂರ | ರಾಣಿಬೆನ್ನೂರ, ಹಾವೇರಿ, ಬ್ಯಾಡಗಿ. |
| | 4. ಶಿರಹಟ್ಟಿ | ಶಿರಹಟ್ಟಿ, ಗದಗ, ರೋಣ, ಮುಂಡರಗಿ, ನರಗುಂದ. |
| 3. ಹಳಿಯಾಳ | ಹಳಿಯಾಳ | ಹಳಿಯಾಳ, ಯಲ್ಲಾಪೂರ |
| | ಕಾರವಾರ | ಕಾರವಾರ, ಅಂಕೋಲಾ, ಕುಮಟಾ, ಹೊನ್ನಾವರ, ಭಟ್ಕಳ ಸೂಪಾ |
| | ಶಿರಸಿ | ಶಿರಸಿ, ಸಿದ್ದಾಪೂರ, ಮುಂಡಗೋಡ. |
| 4. ಬಿಜಾಪೂರ | 1. ಬಿಜಾಪೂರ | ಬಿಜಾಪೂರ, ಮುದ್ದೇಬಿಹಾಳ, ಬಾಗೇವಾಡಿ. |
| | 2. ಇಂಡಿ | ಇಂಡಿ, ಸಿಂದಗಿ. |
| | 3. ಮುಧೋಳ | ಮುಧೋಳ, ಜಮಖಂಡಿ, ಬೀಳಗಿ. |
| | 4. ಬಾಗಲಕೋಟ | ಬಾಗಲಕೋಟ, ಹುನಗುಂದ, ಬದಾಮಿ. |
| ಬ. ಗುಲಬರ್ಗಾ ವೃತ್ತ | | |
| 5. ಗುಲಬರ್ಗಾ | 1. ಗುಲಬರ್ಗಾ | ಗುಲಬರ್ಗಾ, ಚಿತ್ತಾಪೂರ, ಜೇವರ್ಗಿ. |
| | 2. ಚಿಂಚೋಳಿ | ಚಿಂಚೋಳಿ, ಹುಮನಾಬಾದ |
| | 3. ಸೇಡಂ | ಸೇಡಂ, ಗುಲಬರ್ಗಾ. |
| | 4. ಯಾದಗೀರ | ಯಾದಗೀರ, ಶಹಾಪೂರ, ಸುರಪೂರ. |
| | 5. ಅಫಜಲಪೂರ | ಅಫಜಲಪೂರ, ಆಳಂದ. |
| 6. ಬೀದರ | 1. ಬೀದರ | ಬೀದರ, ಔರಾದ. |
| | 2. ಬಸವಕಲ್ಯಾಣ | ಬಸವಕಲ್ಯಾಣ, ಭಾಲ್ಕಿ. |
| 7. ಬಳ್ಳಾರಿ | 1. ಬಳ್ಳಾರಿ | ಬಳ್ಳಾರಿ, ಹೊಸಪೇಟ, ಶಿರಗುಪ್ಪ. |
| | 2.ಹೂವಿನ ಹಡಗಲಿ | ಹೂವಿನಹಡಗಲಿ ಹಗರಿ ಬೊಮ್ಮನಹಳ್ಳಿ. |
| | 3. ಕೂಡ್ಲಗಿ | ಕೂಡ್ಲಗಿ, ಸೊಂಡೂರ. |
| 8. ಕುಷ್ಟಗಿ | 1. ಕುಷ್ಟಗಿ | ಕುಷ್ಟಗಿ, ಲಿಂಗಸಗೂರ, ಸಿಂಧನೂರ. |
| | 2. ಕೊಪ್ಪಳ | ಕೊಪ್ಪಳ, ಗಂಗಾವತಿ, ಯಲಬುರ್ಗಾ. |
| | 3. ರಾಯಚೂರ | ರಾಯಚೂರ, ಮಾನ್ವಿ, ದೇವದುರ್ಗ. |
| 10. ಗುಣ ನಿಯಂತ್ರಣ ವಿಭಾಗ, ಧಾರವಾಡ | 1. ಧಾರವಾಡ | ಧಾರವಾಡ, ಉತ್ತರಕನ್ನಡ, ಗದಗ, ಹಾವೇರಿ. |
| | 2. ಬೆಳಗಾವಿ | ಬೆಳಗಾವಿ, ಬಿಜಾಪೂರ, ಬಾಗಲಕೋಟ. |
| | 3. ಬಳ್ಳಾರಿ | ಬಳ್ಳಾರಿ, ರಾಯಚೂರ, ಕೊಪ್ಪಳ. |
| | 4. ಗುಲಬರ್ಗಾ | ಗುಲಬರ್ಗಾ, ಬೀದರ. |

ಮುಖ್ಯ ಇಂಜಿನಿಯರರು, ಸಣ್ಣ ನೀರಾವರಿ ವಲಯದ ಕಛೇರಿಗಳ ಮುಖ್ಯಸ್ಥರಾಗಿರುತ್ತಾರೆ. ಇವರ ಅಧೀನದಲ್ಲಿ ಮುಖ್ಯವಾಗಿ ಐದು ಶಾಖೆಗಳು ಕಾರ್ಯನಿರ್ವಹಿಸುರುತ್ತವೆ.

1. ಆಡಳಿತ ಶಾಖೆ
2. ಲೆಕ್ಕ ಶಾಖೆ
3. ತಾಂತ್ರಿಕ ಶಾಖೆ
4. ವಿನ್ಯಾಸ ಶಾಖೆ
5. ಸಾಂಖ್ಯಿಕ ಕೋಶ

ಈ ಶಾಖೆಗಳ ಕಾರ್ಯ ಚಟುವಟಿಕೆಗಳನ್ನು ಕೆಳಕಂಡಂತೆ ವಿವರಿಸಿದೆ.

**1. ಆಡಳಿತ ಶಾಖೆ:**

ಮುಖ್ಯ ಅಭಿಯಂತರರು, ಸಣ್ಣ ನೀರಾವರಿ (ಉತ್ತರ) ವಲಯದ ಮುಖ್ಯಸ್ಥರಾಗಿದ್ದು, ಮಂಜೂರಾಗಿರುವ ೯೩೩ ಹುದ್ದೆಗಳ ಪೈಕಿ 840 ಹುದ್ದೆಗಳ ಸಿಬ್ಬಂದಿಯವರು ಕಾರ್ಯನಿರ್ವಹಿಸುತ್ತಿದ್ದಾರೆ. ಈ ಸಂಖ್ಯೆಗಳ ಪೈಕಿ ಹಾಲಿ ಕಾರ್ಯ ನಿರ್ವಹಿಸುತ್ತಿರುವ ವರ್ಗ **ಎ** ನೌಕರರು 48 ವರ್ಗ **ಬಿ** 153 ವರ್ಗ **ಸಿ** 468 ಮತ್ತು ವರ್ಗ **ಡಿ** 171 ಸಂಖ್ಯೆಗಳಾಗಿರುತ್ತವೆ.

ಸಣ್ಣ ನೀರಾವರಿ (ಉತ್ತರ) ಮುಖ್ಯ ಅಭಿಯಂತರರ ಕಛೇರಿಯಲ್ಲಿ 94 ಹುದ್ದೆಗಳ ಪೈಕಿ 85 ಹುದ್ದೆಗಳ ಸಿಬ್ಬಂದಿಯವರು ಹಾಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಸಂಖ್ಯೆಗಳ ಪೈಕಿ ಹಾಲಿ ಕಾರ್ಯ ನಿರ್ವಹಿಸುತ್ತಿರುವ ವರ್ಗ **ಎ** ನೌಕರರು 6 ವರ್ಗ **ಬಿ** 13 ವರ್ಗ **ಸಿ** 51 ಮತ್ತು ವರ್ಗ **ಡಿ** 15 ಸಂಖ್ಯೆಗಳಾಗಿರುತ್ತವೆ.

ನಿಬಂಧಕರು ಆಡಳಿತ ಶಾಖೆಯ ಮುಖ್ಯಸ್ಥರಾಗಿದ್ದು, ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳು, ಭವಿಷ್ಯನಿಧಿಗಳ ದಾಖಲೆಗಳನ್ನು ನಿರ್ವಹಿಸುವುದು, ವರ್ಗಾವಣೆ, ಲೇಖನ ಸಾಮಗ್ರಿಗಳನ್ನು ಖರೀದಿಸುವುದು, ವಿಚಾರಣೆ, ವಿದ್ಯುಚ್ಛಕ್ತಿ, ದೂರವಾಣಿ ಬಿಲ್‌ಗಳನ್ನು ಪಾವತಿಸುವುದು, ದಾಖಲೆಗಳನ್ನು ಸಂಗ್ರಹಿಸಿ ಕಾಪಾಡುವುದು ಮತ್ತು ಒಪ್ಪಂದದ ಮೇರೆಗೆ ಹುದ್ದೆಗಳಿಗೆ ನೇಮಕ ಮಾಡಿಕೊಳ್ಳುವ ಕಾರ್ಯವನ್ನು ನಿರ್ವಹಿಸುತ್ತಿರುತ್ತಾರೆ. ಮತ್ತು ವಿಭಾಗಗಳ ಮೀಸಲು ದಾಸ್ತಾನು ಮಿತಿ (RSL)ಯನ್ನು ಮಂಜೂರು ಮಾಡುವುದು.

ಈ ಆಡಳಿತ ಶಾಖೆಯನ್ನು ೩ ಉಪಶಾಖೆಗಳಾಗಿ ವಿಂಗಡಿಸಿದ್ದು, ಪ್ರತಿ ಶಾಖೆಗೆ ಒಬ್ಬ ಅಧೀಕ್ಷಕರು ಶಾಖೆಯ ಮುಖ್ಯಸ್ಥರಾಗಿರುತ್ತಾರೆ. ಅವುಗಳೆಂದರೆ:

(1) ಆಡಳಿತ ಶಾಖೆ,

(2) ನಗದು, ಸ್ವೀಕೃತಿ ಮತ್ತು ರವಾನೆ ಶಾಖೆ.

(3) ಕೇಂದ್ರ ಸಿಬ್ಬಂದಿ ಶಾಖೆ.

**1) ಆಡಳಿತ ಶಾಖೆ:-**

ಆಡಳಿತ ಶಾಖೆಯು ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳು, ವರ್ಗಾವಣೆ, ಲೇಖನ ಸಾಮಗ್ರಿಗಳನ್ನು ಖರೀದಿಸುವುದು. ವಿದ್ಯುಚ್ಛಕ್ತಿ, ದೂರವಾಣಿ ಮತ್ತು ನೀರಿಗೆ ಸಂಬಂಧಿಸಿದ ಸಾದಿಲ್ವಾರು ಬಿಲ್‌ಗಳನ್ನು ತಯಾರಿಸಿ ಪಾವತಿಸುವುದು ಮತ್ತು ಒಪ್ಪಂದ ಮೇರೆಗೆ ಹುದ್ದೆಗಳನ್ನು ನೇಮಕ ಮಾಡಿಕೊಳ್ಳುವ ಕಾರ್ಯವನ್ನು ನಿರ್ವಹಿಸುತ್ತದೆ.

**೨) ಸಿಬ್ಬಂದಿ, ಸ್ವೀಕೃತಿ ಮತ್ತು ರವಾನೆ ಶಾಖೆ.**

ನಗದು ಮತ್ತು ಸ್ವೀಕೃತಿ ಮತ್ತು ರವಾನೆ ಶಾಖೆಯು ದಾಖಲೆಗಳನ್ನು ನಿರ್ವಹಿಸುವುದು, ಸೇವಾ ಅಂಚೆ ಚೀಟಿಗಳ ದಾಖಲೆ ನಿರ್ವಹಣೆ ದೈನಂದಿನ ಪತ್ರಗಳನ್ನು ರವಾನಿಸುವುದು ಹಾಗೂ ಸ್ವೀಕರಿಸುವುದು ಇತ್ಯಾದಿ ಕೆಲಸಗಳನ್ನು ನಿರ್ವಹಿಸುತ್ತದೆ.

**೨. ಲೆಕ್ಕ ಶಾಖೆ:**

ಲೆಕ್ಕಾಧಿಕಾರಿಗಳು ಲೆಕ್ಕ ಶಾಖೆಯ ಮುಖ್ಯಸ್ಥರಾಗಿದ್ದು, ಅವರ ಕೆಳಗೆ ಒಬ್ಬ ಲೆಕ್ಕ ಅಧೀಕ್ಷಕರು, ಒಬ್ಬ ಪ್ರಥಮ ದರ್ಜೆ ಸಹಾಯಕ ಮತ್ತು ದ್ವಿತಿಯ ದರ್ಜೆ ಸಹಾಯಕರು ಕೆಲಸಗಳನ್ನು ನಿರ್ವಹಿಸುತ್ತಾರೆ.

ಲೆಕ್ಕ ಶಾಖೆಯ ಕಾರ್ಯಭಾರ ಈ ಕೆಳಗಿನಂತಿದೆ:

(i) ವೇತನ ಮತ್ತು ನಿರ್ವಹಣೆಗೆ ಅನುದಾನವನ್ನು ನಿಗಧಿಪಡಿಸುವುದು.
(ii) ಅನುದಾನ ಮತ್ತು ವೆಚ್ಚ ಮತ್ತು ನಬಾರ್ಡ್ ಮರುಪಾವತಿಗಳ ಕುರಿತು ಉಸ್ತುವಾರಿ ಕಾರ್ಯ ನಿರ್ವಹಿಸುವುದು.
(iii) ಬಾಕಿ ಬಿಲ್ಲುಗಳ ಕ್ರೋಢೀಕೃತ ಪ್ರಸ್ತಾವನೆಗಳನ್ನು ತಯಾರಿಸುವುದು. ಸರಕಾರದಿಂದ ಬಿಡುಗಡೆಯಾದ ಹಣ ಭರವಸೆ ಪತ್ರ ಪಾವತಿ ಮಾಡುವುದು.
(V) ತನಿಖಾ ವರದಿ ಮತ್ತು ಡ್ರಾಫ್ಟ್ ಪ್ಯಾರಾಗಳ ಆಧಾರದ ಮೇಲೆ ಸಿ ಮತ್ತು ಎ.ಜಿ. ವರದಿಗಳಿಗೆ ಉತ್ತರವನ್ನು ತಯಾರುಗೊಳಿಸುವುದು.
(iv) ಕೇಂದ್ರ ಕಛೇರಿಯ ಲೆಕ್ಕವನ್ನು ಮರುಹೊಂದಾಣಿಕೆ ಮಾಡುವುದು.
(V) ಭೂಸ್ವಾಧೀನ ಪ್ರಕರಣಗಳ ನಿರ್ವಹಣೆ ಹಾಗೂ ಕಡತಗಳ ವಿಲೇವಾರಿ.

೩. **ತಾಂತ್ರಿಕ ವಿಭಾಗ:**

ಕಾರ್ಯಪಾಲಕ ಅಭಿಯಂತರರು (ವಿನ್ಯಾಸ) ಇವರು ಸಣ್ಣ ನೀರಾವರಿ ಇಲಾಖೆಯ ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟ ಎಲ್ಲಾ ಕಾರ್ಯಗಳ ಕಾರ್ಯಭಾರವನ್ನು ಹೊಂದಿದ್ದು ಇವರಿಗೆ ಸಹಾಯಕ್ಕಾಗಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಶ್ರೇಣಿಯ 5 ಜನ ತಾಂತ್ರಿಕ ಸಹಾಯಕರಿರುತ್ತಾರೆ. ಈ ತಾಂತ್ರಿಕ ಸಹಾಯಕರ ಕಾರ್ಯವ್ಯಾಪ್ತಿಯನ್ನು ಈ ಕೆಳಗೆ ಸೂಚಿಸಿರುವಂತೆ ನಿಗಧಿಪಡಿಸಲಾಗಿದೆ.

**ತಾಂತ್ರಿಕ ಸಹಾಯಕರು – 1 ಶ್ರೀ ಪಿ.ಬಿ. ದೇಸಾಯಿ ಸಹಾಯಕ ಕಾರ್ಯಪಾಲಕ ಇಂಜಿನೀಯರರು,**

ಬಿಜಾಪೂರ ಮತ್ತು ಬಳ್ಳಾರಿ ವಿಭಾಗಕ್ಕೆ ಸಂಬಂಧಪಟ್ಟ ಕಾರ್ಯಗಳ ನಿರ್ವಹಣೆ, ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಕಾರ್ಯವನ್ನು ನೋಡಿಕೊಳ್ಳುವುದು, ಬೃಹತ್ ಅಣೆಕಟ್ಟುಗಳ ನಿಯತಕಾಲಿಕ ವರದಿಯ ಪರಿಶೀಲನೆ, ಡ್ಯಾಮ ಸೇಫ್ಟಿ, ಕೃಷ್ಣಾ ವಾಟರ ಡಿಸ್ಪ್ಯೂಟ, ನದಿ ಸಂರಕ್ಷಣಾ ಕಾಮಗಾರಿ.

**ತಾಂತ್ರಿಕ ಸಹಾಯಕರು – ೨ ಶ್ರೀ. ಡಿ.ಎಲ್. ತೇರಗಾಂವ ಸಹಾಯಕ ಕಾರ್ಯಪಾಲಕ ಇಂಜಿನೀಯರರು,**

ಗುಲಬರ್ಗಾ ವೃತ್ತ, ಬಳ್ಳಾರಿ ವಿಭಾಗ, ಹೊರತುಪಡಿಸಿ, ಕಾರ್ಯಗಳ ನಿರ್ವಹಣೆ,

**ತಾಂತ್ರಿಕ ಸಹಾಯಕರು – ೩ ಶ್ರೀ ಎಂ. ಎ. ಗೋಗಿ ಸಹಾಯಕ ಕಾರ್ಯಪಾಲಕ ಇಂಜಿನೀಯರರು,**

ಬೆಳಗಾವಿ ವೃತ್ತ, ಬಿಜಾಪೂರ ವಿಭಾಗ, ಹೊರತುಪಡಿಸಿ, ಕಾರ್ಯಗಳ ನಿರ್ವಹಣೆ,

**ತಾಂತ್ರಿಕ ಸಹಾಯಕರು – 4 ಶ್ರೀ. ಬಿ. ಎಸ್. ಜಡಿಮಠ ಸಹಾಯಕ ಕಾರ್ಯಪಾಲಕ ಇಂಜಿನೀಯರರು**

**ತಾಂತ್ರಿಕ ಸಹಾಯಕರು – 5 ಶ್ರೀ. ಹಿರೇದೇಸಾಯಿ ಸಹಾಯಕ ಕಾರ್ಯಪಾಲಕ ಇಂಜಿನೀಯರರು**

**ಕೆಳಕಂಡ ಮುಖ್ಯವಾದ ತಾಂತ್ರಿಕ ವಿವರದ ಕಾರ್ಯಗಳು ಒಳಗೊಂಡಿರುತ್ತವೆ.**

**1 (ಅ) ಯೋಜನೆ ಕಾಮಗಾರಿಗಳ ಆಯವ್ಯಯ ಅಂದಾಜನ್ನು ತಯಾರಿಸುವುದು**

- ✓ ಉದ್ದೇಶಿಸಿರುವ ಸಣ್ಣ ನೀರಾವರಿ ಕಾಮಗಾರಿಗಳನ್ನು ತಾಂತ್ರಿಕವಾಗಿ ಪರಿಶೀಲಿಸುವುದು.
- ✓ ಅಂದಾಜು ಪಟ್ಟಿ ಹಾಗೂ ವಿನ್ಯಾಸಗಳನ್ನು ಮತ್ತು ಡಿ.ಟಿ.ಎಸ್.ಗಳನ್ನು ಅಂತಿಮಗೊಳಿಸುವುದು.
- ✓ ಸಣ್ಣ ನೀರಾವರಿ (ಉತ್ತರ) ವಲಯದಲ್ಲಿ ನಿರ್ಮಿಸಿ ಸ್ಥಾಪಿಸಲ್ಪಟ್ಟಿರುವ ತಾಂತ್ರಿಕ ಸಲಹಾ ಸಮಿತಿಯಿಂದ
- ✓ ರೂ ೩೦.೦೦ ಲಕ್ಷಕ್ಕೂ ಅಧಿಕವಾಗಿರುವ ಅಂದಾಜು ಪಟ್ಟಿಗಳ ಅನುಮೋದನೆ ಪಡೆಯುವುದು.
- ✓ ವಿವಿಧ ಯೋಜನೆಗಳ ಪ್ರಗತಿಯ ಕುರಿತು ಉಸ್ತುವಾರಿ ಕಾರ್ಯ ನಿರ್ವಹಿಸುವುದು.
- ✓ ನಬಾರ್ಡ್ ಮತ್ತು ಆರ್‌ಐಡಿಎಫ್ ಕಾಮಗಾರಿಗಳ ಉಸ್ತುವಾರಿ ಕಾರ್ಯ ನಿರ್ವಹಿಸುವುದು.
- ✓ ಎಂಎಂಆರ್ ಮತ್ತು ಕೆಡಿಪಿ ಸಭೆಗಳಿಗೆ ಪ್ರಗತಿಯ ವರದಿಯನ್ನು ತಯಾರಿಸುವುದು.
- ✓ ವಾರ್ಷಿಕ ಮತ್ತು ಪಂಚವಾರ್ಷಿಕ ಯೋಜನೆಗಳನ್ನು ತಯಾರಿಸುವುದು.
- ✓ ವಿಧಾನ ಸಭಾ ಮತ್ತು ವಿಧಾನ ಪರಿಷತ್ ಪ್ರಶ್ನೆಗಳಿಗೆ ಉತ್ತರಿಸುವುದು
- ✓ ಅಂದಾಜು ಸಮಿತಿ ಸಭೆ ಮತ್ತು ಭರವಸೆ ಸಮಿತಿ ಸಭೆಗಳಿಗೆ ಹಾಜರಾಗುವುದು.

**ಕೈಪಿಡಿ – ೨ ಸಂಸ್ಥೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಅಧಿಕಾರ ಮತ್ತು ವಿಧಿಗಳ ವಿವರ:**

ಮುಖ್ಯ ಇಂಜಿನಿಯರ್ ಇವರು ಸಣ್ಣ ನೀರಾವರಿ (ಉತ್ತರ) ವಲಯದ ಮುಖ್ಯಸ್ಥರಾಗಿದ್ದು, ಇವರು ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಇಲಾಖೆ ಇವರ ಅಡಿಯಲ್ಲಿ ಕೆಲಸ ನಿರ್ವಹಿಸುತ್ತಾರೆ.

**(ಅ) ಮುಖ್ಯ ಅಭಿಯಂತರರ ಕಾರ್ಯಭಾರ ಈ ಕೆಳಗಿನಂತಿದೆ.**

1. ಕಾಮಗಾರಿಗಳ ಅಂದಾಜು ಮೊತ್ತವು ರೂ.10.00 ಲಕ್ಷದಿಂದ ರೂ.30.00 ಲಕ್ಷದವರೆಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಅಧಿಕಾರವು ಮುಖ್ಯ ಇಂಜಿನಿಯರ್ ರವರಿಗೆ ಇರುತ್ತದೆ. ಮತ್ತು ರೂ.20.00 ಲಕ್ಷ ಮೇಲ್ಪಟ್ಟ ಕಾಮಗಾರಿಗಳಿಗೆ ತಾಂತ್ರಿಕ ಮಂಜೂರಾತಿ ನೀಡುವ ಅಧಿಕಾರ ಮುಖ್ಯ ಇಂಜಿನಿಯರ್ ರವರಿಗೆ ಇರುತ್ತದೆ.
2. ಅಂದಾಜು ರೂ.15.00 ಲಕ್ಷದಿಂದ ರೂ.250.00 ಲಕ್ಷಗಳ ಕಾಮಗಾರಿಯ ಕರಡು ಗುತ್ತಿಗೆ ಅನುಸೂಚಿಗೆ ಅನುಮೋದನೆ ನೀಡುವುದು.
3. ಅಂದಾಜು ರೂ250.00 ಲಕ್ಷಕ್ಕಿಂತ ಮೀರಿದ್ದಲ್ಲಿ, ಸದರಿ ಕಾಮಗಾರಿಯ ಕರಡು ಗುತ್ತಿಗೆ ಅನುಸೂಚಿಗೆ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಮುಂದೆ ಮಂಡಿಸಿ ತೀರುವಳಿ ಪಡೆದು ಅನುಮೋದನೆ ನೀಡುವುದು.
4. ಶೇಕಡ 4.00 ರಿಂದ ಶೇಕಡ 6.00ರವರೆಗೆ ಹೆಚ್ಚಿಗೆ ಇರುವ ಟೆಂಡರುಗಳಿಗೆ ಅನುಮೋದನೆ ನೀಡುವುದು.
5. ಶೇಕಡ 6 ಕ್ಕಿಂತ ಹೆಚ್ಚಿಗೆ ಇರುವ ಟೆಂಡರುಗಳಿಗೆ ಸಂಧಾನ ನಡೆಸಿ ಗುತ್ತಿಗೆದಾರರು ಹೆಚ್ಚಿಗೆ ಶೇಕಡಾ ಇರುವ ದರವನ್ನು 6.00 ಯಾ ಅದಕ್ಕಿಂತ ಕಡಿಮೆ ಮಾಡಿ ಅನುಮೋದಿಸುವುದು.
6. ಪ್ರತಿ ತಿಂಗಳಲ್ಲಿ ಎಂ.ಎಂ.ಆರ್. ಸಭೆ ನಡೆಸಿ, ಕಾಮಗಾರಿಗಳ ಆರ್ಥಿಕ ಹಾಗೂ ಭೌತಿಕ ಪ್ರಗತಿ ಪರಿಶೀಲನೆ ಮಾಡುವುದು.
7. ವಿಧಾನ ಸಭೆ ಹಾಗೂ ವಿಧಾನ ಪರಿಷತ್ ನಡವಳಿಯಲ್ಲಿ ಪ್ರಶ್ನೆಗಳಿಗೆ ಉತ್ತರವನ್ನು ತಯಾರಿಸಿ ಸರ್ಕಾರಕ್ಕೆ ಸಲ್ಲಿಸಲಾಗುವುದು.
8. ಅಧೀನ ಕಛೇರಿಗಳ ಆಡಳಿತಾತ್ಮಕ ಪರಿವೀಕ್ಷಣೆ ನಡೆಸುವುದು.
9. ಮಹಾಲೇಖಪಾಲಕರ ತಪಾಸಣಾ ವರದಿಗಳಿಗೆ ಉತ್ತರ ನೀಡುವುದು. ಹಾಗೂ ಸರ್ಕಾರದ ನಿಗಧಿತ ಸಭೆಗಳಿಗೆ ಹಾಜರಾಗುವುದು ಹಾಗೂ ಚರ್ಚಿಸಿದ ಅಂಶಗಳ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳುವುದು.
10. ಸಾಮಾನ್ಯ ಆಡಳಿತವನ್ನು ನಿರ್ವಹಿಸುವುದು.
11. ಪ್ರಗತಿಯಲ್ಲಿರುವ ಕಾಮಗಾರಿಗಳ ಪ್ರಗತಿಯನ್ನು ತಪಾಸಣೆ ನಡೆಸುವುದು.
12. ಮುಖ್ಯ ಅಭಿಯಂತರವರ ಕಛೇರಿಯಲ್ಲಿರುವ ಮಾಹಿತಿಯನ್ನು ಮಾಹಿತಿ ಪಡೆಯುವ ಹಕ್ಕಿನ ನಿಯಮ ಪ್ರಕಾರ ಕೋರಿಕೆ ಬಂದಲ್ಲಿ ಸಾರ್ವಜನಿಕರಿಗೆ ನೀಡುವುದು.
13. ಕೆಲಸ ನಿರ್ವಹಿಸುವಾಗ ಗುತ್ತಿಗೆಯ ಅಂಶಗಳಲ್ಲಿ ಇಲಾಖೆ ಮತ್ತು ಗುತ್ತಿಗೆದಾರರ ಮಧ್ಯೆ ಏನಾದರೂ ತಕರಾರು ಬಂದಲ್ಲಿ ಅದನ್ನು ಪರಿಗಣಿಸುವುದು. ಈ ಬಗ್ಗೆ ಮುಖ್ಯ ಅಭಿಯಂತರವರ ನಿರ್ಣಯವೇ ಅಂತಿಮವಾಗಿರುತ್ತದೆ.
14. ಸಣ್ಣ ನೀರಾವರಿ ಇಲಾಖೆಗೆ ಸಂಬಂಧಪಟ್ಟಂತೆ ಇಡೀ ರಾಜ್ಯದ ಅಂಕಿ ಅಂಶಗಳನ್ನು ನಿರ್ವಹಿಸುವುದು.

ಕಛೇರಿಯ ಉಳಿದ ಅಧಿಕಾರಿಗಳು ಮತ್ತು ಸಿಬ್ಬಂದಿಗಳಿಗೆ ಪ್ರತ್ಯೇಕವಾಗಿ ಸ್ವತಂತ್ರ ಅಧಿಕಾರವನ್ನು ನೀಡಿರುವುದಿಲ್ಲ. ಅಧಿಕಾರಿಗಳು ಮತ್ತು ಸಿಬ್ಬಂದಿಗಳು ಮುಖ್ಯ ಇಂಜಿನಿಯರ್‌ರವರ ಕರ್ತವ್ಯ ನಿಭಾಯಿಸಲು ಅವರಿಗೆ ಸಹಕರಿಸುತ್ತಾರೆ.

**(ಆ) ಅಧೀಕ್ಷಕ ಇಂಜಿನೀಯರ್‌ರವರ ಕಾರ್ಯಭಾರ ಈ ಕೆಳಕಂಡಂತಿದೆ.**

1. ಅಧೀಕ್ಷಕ ಇಂಜಿನಿಯರ್‌ರವರು ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಾರೆ. ಇವರ ಅಧಿಕಾರ ವ್ಯಾಪ್ತಿಯಲ್ಲಿ ಬರುವ ಕಾಮಗಾರಿಗಳ ಅಂದಾಜುಗಳಿಗೆ ಮಂಜೂರಾತಿ ನೀಡುವ ಅಧಿಕಾರ ಹೊಂದಿರುತ್ತಾರೆ.
2. ಪ್ರತಿ ತಿಂಗಳು ಎಂ.ಎಂ.ಆರ್. ಸಭೆಯನ್ನು ನಡೆಸಿ ಕಾಮಗಾರಿಗಳ ಆರ್ಥಿಕ ಹಾಗೂ ಭೌತಿಕ ಪ್ರಗತಿಯನ್ನು ಪರಿಶೀಲನೆ ಮಾಡುವುದು.
3. ವಿಧಾನ ಸಭೆ ಮತ್ತು ವಿಧಾನ ಪರಿಷತ್ತು ನಡುವಳಿ ಪ್ರಶ್ನೆಗಳಿಗೆ ಉತ್ತರವನ್ನು ತಯಾರಿಸಿ ಮುಖ್ಯ ಇಂಜಿನೀಯರ್‌ರವರಿಗೆ ಸಲ್ಲಿಸುವುದು.
4. ಅಧೀನ ಕಛೇರಿಗಳ ಆಡಳಿತಾತ್ಮಕ ಪರಿಶೀಲನೆ ನಡೆಸುವುದು.
5. ಮಹಾ ಲೇಖಪಾಲರ ತಪಾಸಣೆಗಳಿಗೆ ಉತ್ತರವನ್ನು ನೀಡುವುದು.
6. ಸಾಮಾನ್ಯ ಆಡಳಿತವನ್ನು ನಿರ್ವಹಿಸುವುದು.
7. ಪ್ರಗತಿಯಲ್ಲಿರುವ ಕಾಮಗಾರಿಗಳ ತಪಾಸಣೆ ನಡೆಸುವುದು.
8. ವೃತ್ತ ಕಛೇರಿಯಲ್ಲಿರುವ ಮಾಹಿತಿಯನ್ನು ಮಾಹಿತಿ ಪಡೆಯುವ ಹಕ್ಕಿನ ನಿಯಮದ ಪ್ರಕಾರ ಕೋರಿಕೆ ಬಂದಲ್ಲಿ ನಿಗದಿತ ಸಮಯದೊಳಗೆ ಸಾರ್ವಜನಿಕರಿಗೆ ಮಾಹಿತಿ ನೀಡುವುದು.
9. ಸಂಬಂಧಿಸಿದ ವೃತ್ತದ ದರಪಟ್ಟಿಗಳನ್ನು ನಿಯಮಾನುಸಾರ ತಯಾರಿಸಿ ಪ್ರತಿ ಆರ್ಥಿಕ ವರ್ಷದಲ್ಲಿ ಪ್ರಕಟಣೆ ಮಾಡುವುದು.
10. ವೃತ್ತ ಕಛೇರಿಯ ತಾಂತ್ರಿಕ ಶಾಖೆ, ಆಡಳಿತ ಶಾಖೆ ಮತ್ತು ಲೆಕ್ಕ ಶಾಖೆಯಲ್ಲಿನ ಶಾಖಾಧಿಕಾರಿಗಳು ಅಧೀಕ್ಷಕ ಇಂಜಿನಿಯರ್‌ರವರಿಗೆ ವೃತ್ತ ಕಛೇರಿಯ ಕೆಲಸ ನಿರ್ವಹಣೆಯಲ್ಲಿ ಜವಾಬ್ದಾರಿಯಿಂದ ಕೆಲಸ ನಿರ್ವಹಿಸುವುದು.
11. ತಾಂತ್ರಿಕ ಶಾಖೆಯಲ್ಲಿ ಒಬ್ಬ ತಾಂತ್ರಿಕ ಸಹಾಯಕರು (ಸಹಾಯಕ ಕಾರ್ಯಪಾಲಕ ಇಂಜಿನೀಯರ್‌ರವರ ಹುದ್ದೆಯಲ್ಲಿ), ಆಡಳಿತ ಶಾಖೆಯಲ್ಲಿ ನಿಬಂಧಕರು/ಅಧೀಕ್ಷಕರು, ಲೆಕ್ಕ ಶಾಖೆಯಲ್ಲಿ ಪ್ರಥಮ ದರ್ಜೆ ಲೆಕ್ಕ ಸಹಾಯಕರು (ರಾಜ್ಯ ಲೆಕ್ಕ ಪತ್ರ ಇಲಾಖೆ) ಅಥವಾ ಪ್ರಥಮ ದರ್ಜೆ ಸಹಾಯಕರು ವೃತ್ತ ಕಛೇರಿ ವ್ಯಾಪ್ತಿಯ ಕೆಲಸವನ್ನು ನಿರ್ವಹಿಸುವಲ್ಲಿ ಅಧೀಕ್ಷಕ ಇಂಜಿನಿಯರ್‌ರವರಿಗೆ ಜವಾಬ್ದಾರಿಯುತರಾಗಿರುತ್ತಾರೆ.
12. ವೃತ್ತ ಕಛೇರಿಯ ಅಧೀನದಲ್ಲಿ 3ನೇ ದರ್ಜೆಯ ಗುತ್ತಿಗೆದಾರರ ನೋಂದಣಿಯನ್ನು ನಿಯಮಾವಳಿಗಳ ಪ್ರಕಾರ ನಿರ್ವಹಿಸಲಾಗುತ್ತದೆ.
13. ವೃತ್ತ ಕಛೇರಿ ಮತ್ತು ಅಧೀನ ಕಛೇರಿಗಳ ಲೆಕ್ಕ ಪತ್ರಗಳ ಹೊಂದಾಣಿಕೆಯನ್ನು ಮಹಾಲೇಖಪಾಲರು, ಬೆಂಗಳೂರು ಅವರೊಂದಿಗೆ ಪತ್ರ ವ್ಯವಹಾರ ನಡೆಸಿ ನಿರ್ವಹಿಸುತ್ತಾರೆ.

**(ಇ) ಕಾರ್ಯಪಾಲಕ ಇಂಜಿನೀಯರರ ಕಾರ್ಯಭಾರ ಈ ಕೆಳಕಂಡಂತಿದೆ.**

1. ಕಾರ್ಯಪಾಲಕ ಇಂಜಿನಿಯರ್‌ರವರು ನಿಯಮಾವಳಿಗಳ ಪ್ರಕಾರ ಕಾಮಗಾರಿಗಳ ಅಂದಾಜುಗಳಿಗೆ ಮಂಜೂರಾತಿ ನೀಡುವ ಅಧಿಕಾರ ಹೊಂದಿರುತ್ತಾರೆ.

2. ಪ್ರತಿ ತಿಂಗಳು ಎಂ.ಎಂ.ಆರ್. ಸಭೆಯನ್ನು ನಡೆಸಿ ಕಾಮಗಾರಿಗಳ ಆರ್ಥಿಕ ಹಾಗೂ ಭೌತಿಕ ಪ್ರಗತಿಯನ್ನು ಪರಿಶೀಲನೆ ಮಾಡುವುದು.
3. ವಿಧಾನ ಸಭೆ ಮತ್ತು ವಿಧಾನ ಪರಿಷತ್ತು ನಡುವಳಿ ಪ್ರಶ್ನೆಗಳಿಗೆ ಉತ್ತರವನ್ನು ತಯಾರಿಸಿ ಮೇಲಧಿಕಾರಿಗಳಿಗೆ ಸಲ್ಲಿಸುವುದು.
4. ಅಧೀನ ಉಪ ವಿಭಾಗಗಳ ಆಡಳಿತಾತ್ಮಕ ತಪಾಸಣೆ ನಡೆಸುವುದು.
5. ಮಹಾಲೇಖಪಾಲರಿಗೆ ಪ್ರತಿ ತಿಂಗಳು ನಿಗದಿತ ದಿನಾಂಕದೊಳಗೆ ಸಂಬಂಧಿಸಿದ ವಿಭಾಗಗಳ ಲೆಕ್ಕ ವಿಚಾರಗಳು ಮತ್ತು ಉಗ್ರಾಣ ವಿಚಾರಗಳ ವಿಷಯಗಳಿಗೆ ಸಂಬಂಧಿಸಿದ ವರದಿಯನ್ನು ಒಪ್ಪಿಸುವುದು.
6. ಮಹಾ ಲೇಖಪಾಲರ ತಪಾಸಣಾ ವರದಿಗೆ ಉತ್ತರವನ್ನು ನೀಡುವುದು.
7. ಸರ್ಕಾರ, ವಲಯದ ಮತ್ತು ವೃತ್ತದ ಸಭೆಗಳಿಗೆ ಹಾಜರಾಗುವುದು ಹಾಗೂ ಸಭೆಗಳಲ್ಲಿ ಚರ್ಚಿಸಿದ ವಿಷಯಗಳ ಬಗ್ಗೆ ನಿಯಮಾನುಸಾರ ಸೂಕ್ತ ಕ್ರಮ ತೆಗೆದುಕೊಳ್ಳುವುದು.
8. ಸಾಮಾನ್ಯ ಆಡಳಿತವನ್ನು ನಿರ್ವಹಿಸುವುದು.
9. ಪ್ರಗತಿಯಲ್ಲಿರುವ ಕಾಮಗಾರಿಗಳ ಪ್ರಗತಿಯನ್ನು ತಪಾಸಣೆ ನಡೆಸುವುದು.
10. ವಿಭಾಗ ಕಛೇರಿಯಲ್ಲಿರುವ ಮಾಹಿತಿಯನ್ನು ಮಾಹಿತಿ ಪಡೆಯುವ ಹಕ್ಕಿನ ನಿಯಮದ ಪ್ರಕಾರ ಅರ್ಜಿದಾರರಿಗೆ ನಿಗದಿತ ಸಮಯದೊಳಗೆ ಮಾಹಿತಿ ನೀಡುವುದು.
11. ಗುತ್ತಿಗೆದಾರರ ವಾರ್ಷಿಕ ರಹಸ್ಯ ವರದಿಗಳನ್ನು ನಿರ್ವಹಿಸುವುದು ಮತ್ತು ಮೇಲಾಧಿಕಾರಿಗಳಿಗೆ ಒಪ್ಪಿಸುವುದು.
12. ಸಣ್ಣ ನೀರಾವರಿ ವಿಭಾಗಕ್ಕೆ ಸಂಬಂಧಿಸಿದಂತೆ, ಇಡೀ ವಿಭಾಗದ ಅಂಕಿ ಅಂಶವನ್ನು ನಿರ್ವಹಿಸುವುದು.
13. ವಿಭಾಗ ಕಛೇರಿಯ ತಾಂತ್ರಿಕ ಶಾಖೆ, ಆಡಳಿತ ಶಾಖೆ ಮತ್ತು ಲೆಕ್ಕ ಶಾಖೆಯಲ್ಲಿನ ಶಾಖಾಧಿಕಾರಿಗಳು ಕಾರ್ಯಪಾಲಕ ಇಂಜಿನಿಯರ್‌ರವರಿಗೆ ವಿಭಾಗ ಕಛೇರಿಯ ಕೆಲಸ ಕಾರ್ಯಗಳಲ್ಲಿ ನಿಯಮಾನುಸಾರ ಜವಾಬ್ದಾರಿಯುತವಾಗಿ ಕೆಲಸ ನಿರ್ವಹಿಸುವುದು.
14. ತಾಂತ್ರಿಕ ಶಾಖೆಯ ಮುಖ್ಯಸ್ಥರಾಗಿ ಒಬ್ಬ ಸಹಾಯಕ ಕಾರ್ಯಪಾಲಕ ಇಂಜಿನಿಯರ್/ಸಹಾಯಕ ಇಂಜಿನಿಯರ್, ಆಡಳಿತ ಶಾಖೆಯಲ್ಲಿ ಅಧೀಕ್ಷಕರು/ಪ್ರಥಮ ದರ್ಜೆ ಸಹಾಯಕರು ಮತ್ತು ಲೆಕ್ಕ ಶಾಖೆಯಲ್ಲಿ ಒಬ್ಬ ಲೆಕ್ಕ ಅಧೀಕ್ಷಕರು(ರಾಜ್ಯ ಲೆಕ್ಕ ಪತ್ರ ಇಲಾಖೆ) ಕಾರ್ಯಪಾಲಕ ಇಂಜಿನೀಯರ್‌ರವರಿಗೆ ಜವಾಬ್ದಾರಿಯುತರಾಗಿರುತ್ತಾರೆ.

**(ಈ) ಸಹಾಯಕ ಕಾರ್ಯಪಾಲಕ ಇಂಜಿನೀಯರ್‌ಗಳ ಕಾರ್ಯಭಾರ ಈ ಕೆಳಕಂಡಂತಿದೆ.**

1. ಪ್ರತಿಯೊಂದು ಉಪ ವಿಭಾಗದ ಮುಖ್ಯಸ್ಥರಾಗಿ ಸಹಾಯಕ ಕಾರ್ಯಪಾಲಕ ಇಂಜಿನೀಯರ್‌ರವರು ಇರುತ್ತಾರೆ. ಇವರು ಉಪ ವಿಭಾಗದ ಕಾಮಗಾರಿಗಳ ಅಳತೆಗಳನ್ನು ಶೇಕಡಾ 100 ರಷ್ಟು ಪರಿಶೀಲನೆ ಮಾಡಬೇಕಾಗುತ್ತದೆ.
2. ಮೇಲಧಿಕಾರಿಗಳು ನೀಡಿರುವ ತಪಾಸಣೆಯ ಟಿಪ್ಪಣಿಗಳಿಗೆ ತ್ವರಿತವಾಗಿ ವರದಿಯನ್ನು ನಿಯಮಾವಳಿಗಳಂತೆ ಸಲ್ಲಿಸುವುದು.
3. ಉಪ ವಿಭಾಗದ ಸಿಬ್ಬಂದಿ, ಲೆಕ್ಕ ವಿಚಾರಗಳು ಮತ್ತು ತಾಂತ್ರಿಕ ವಿಚಾರಗಳು, ಉಗ್ರಾಣದ ಲೆಕ್ಕ ವಿಚಾರಗಳು ಈ ಎಲ್ಲವನ್ನೂ ನಿರ್ವಹಿಸುವಲ್ಲಿ ಅವರೇ ಜವಾಬ್ದಾರರಾಗಿರುತ್ತಾರೆ.
4. ಉಪ ವಿಭಾಗದಲ್ಲಿ ಶಾಖಾಧಿಕಾರಿಗಳು ಇರುವುದಿಲ್ಲ. ಅವರ ಅಧೀನದಲ್ಲಿ ಪ್ರಥಮ ದರ್ಜೆ ಸಹಾಯಕರು, ದ್ವಿತೀಯ ದರ್ಜೆ ಸಹಾಯಕರು, ಸಹಾಯಕ ಇಂಜಿನೀಯರ್, ಕಿರಿಯ ಇಂಜಿನೀಯರ್‌ಗಳು, ಬೆರಳಚ್ಚುಗಾರರು ಉಪ ವಿಭಾಗದ ಕೆಲಸಗಳಲ್ಲಿ ಜವಾಬ್ದಾರಿಯುತರಾಗಿ ಸಹಾಯಕ ಕಾರ್ಯಪಾಲಕ ಇಂಜಿನೀಯರರ್‌ರವರಿಗೆ ಕೆಲಸ ನಿರ್ವಹಿಸಲು ಸಹಾಯಕರಾಗಿರುತ್ತಾರೆ.
5. ಸಹಾಯಕ ಕಾರ್ಯಪಾಲಕ ಇಂಜಿನೀಯರ್‌ಗಳು ಕಾರ್ಯಪಾಲಕ ಇಂಜಿನೀಯರ್‌ರವರಿಗೆ ಮಾಹಿತಿಯನ್ನು ನಿಗದಿತ ದಿನಾಂಕದೊಳಗೆ ಎಲ್ಲಾ ನಿಯತಕಾಲಿಕಗಳನ್ನು ನಿಯಮಾನುಸಾರ ಸಲ್ಲಿಸಲು ಕ್ರಮ ತೆಗೆದುಕೊಳ್ಳುವುದು.
6. ಕಾಮಗಾರಿಗಳ ಅಂದಾಜು ತಯಾರಿಕೆ, ಕರಡು ಟೆಂಡರ್ ಪತ್ರಗಳ ತಯಾರಿಕೆ, ಗುತ್ತಿಗೆದಾರರಿಗೆ ನಿವೇಶನವನ್ನು ಮಾರ್ಕ್‌ಡೌನ್ ಮಾಡುವ ಬಗ್ಗೆ ಸಹಾಯಕ ಕಾರ್ಯಪಾಲಕ ಇಂಜಿನೀಯರ್‌ರವರು ಕ್ರಮ ತೆಗೆದುಕೊಳ್ಳಬೇಕಾಗುತ್ತದೆ.

**ಸಹಾಯಕ ಇಂಜಿನೀಯರ್/ಕಿರಿಯ ಇಂಜಿನೀಯರ್‌ರವರುಗಳು ತಾಂತ್ರಿಕ ವಿಚಾರಗಳು, ಶಾಖಾ ಲೆಕ್ಕಗಳು, ಟಿ - ಪಿ ಲೆಕ್ಕಗಳು, ಎಂ.ಎ.ಎಸ್. ಲೆಕ್ಕಗಳು ಮತ್ತು ಇತರೆ ವಾಹನಗಳ ಲೆಕ್ಕಗಳನ್ನು ನಿರ್ವಹಿಸುವರು. ಇವರುಗಳು ಬಿಲ್ಲು ತಯಾರಿಕೆಗಳನ್ನು ನಿರ್ವಹಿಸುವುದು ಅಲ್ಲದೆ, ಪುಸ್ತಕಗಳಲ್ಲಿ ಕಾಮಗಾರಿಗಳ ವಿವರಗಳನ್ನು ಮತ್ತು ಅಳತೆಗಳನ್ನು ನಮೂದಿಸಿ ಗುತ್ತಿಗೆದಾರರಿಗೆ ಬಿಲ್ಲು ಪಾವತಿಸುವಲ್ಲಿ ಸರ್ಕಾರವು ನಿಗದಿಪಡಿಸಿರುವ ಸಮಯದೊಳಗೆ ಪಾವತಿಯಾಗುವಂತೆ ಕ್ರಮ ತೆಗೆದುಕೊಳ್ಳುವುದು.**

**ಕೈಪಿಡಿ–3**

**ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿವಿಧಾನಗಳು ಮತ್ತು ಪರಿವೀಕ್ಷಣೆ ಮತ್ತು ಜವಾಬ್ದಾರಿ ವಿವರಗಳು**

**ಇಲಾಖೆಯು ಕಾಮಗಾರಿಗೆ ಸಂಬಂಧಪಟ್ಟ ಕಾರ್ಯನಿರ್ವಹಿಸುವಲ್ಲಿ**

- ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ – 1 ಮತ್ತು ಭಾಗ – 2
- ಕರ್ನಾಟಕ ಪಾರದರ್ಶಕ ನಿಯಮ
- ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ 1 ಮತ್ತು ಭಾಗ –2 ನ್ನು ಅನುಸರಿಸಲಾಗುವುದು.
- ಭೂಸ್ವಾಧೀನ ಕಾಯ್ದೆ
- ಉಗ್ರಾಣ ಕೈಪಿಡಿ
- ಮಧ್ಯಸ್ಥಿಕೆ ಕಾಯ್ದೆಗಳನ್ನು ಅನುಸರಿಸಲಾಗುತ್ತಿದೆ.

**ನೀರಾವರಿ ಕಾಮಗಾರಿಗಳ ನಿರ್ವಹಣೆಯಲ್ಲಿ**

- ಕರ್ನಾಟಕ ನೀರಾವರಿ ಕಾಯ್ದೆ
- ಕರ್ನಾಟಕ ನೀರಾವರಿ (ನೀರಿನ ಕರ ವಿಧಿಸುವುದು) ನಿಯಮ 1965
- ನೀರಾವರಿ ಕೈಪಿಡಿ 1974

ಇವುಗಳನ್ನು ಅನುಸರಿಸಲಾಗುತ್ತಿದೆ.

